ಸದನದಲ್ಲಿ ಉತ್ತರಿಸುವ ಪ್ರಶ್ನೆಗಳು



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತನೆಯ ಅಧಿವೇಶನ
ಗುರುವಾರ, ದಿನಾಂಕ : 19 ನೇ ಮಾರ್ಚ್, 2020

ರಾಜ್ಯದಲ್ಲಿ ಅಕ್ರಮವಾಗಿ ನೆಲೆಸಿರುವ ಬಾಂಗ್ಲಾದೇಶಿಯರ ಕುರಿತು

ಶ್ರೀ ಲಹರ್ ಸಿಂಗ್ ಸಿರೋಯಾ (ವಿಧಾನಸಭೆಯಿಂದ ಚುನಾಯಿತರಾದವರು) -

ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) -

181 (1420+1548) ಮಾನ್ಯ ಗೃಹ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ-

(ಅ) ರಾಜ್ಯದಲ್ಲಿ ಎಷ್ಟು ಜನ ಅಕ್ರಮ ಬಾಂಗ್ಲಾ ವಲಸಿಗರು ವಾಸವಾಗಿದ್ದಾರೆ ; (ಜಿಲ್ಲಾವಾರು ಮಾಹಿತಿಯನ್ನು ನೀಡುವುದು)

(ಆ) ಬೆಂಗಳೂರು ಮತ್ತು ಬೆಳಗಾವಿಯಂತಹ ಮಹಾನಗರಗಳಲ್ಲಿ ಬಾಂಗ್ಲಾ ವಲಸಿಗರು ಅಕ್ರಮವಾಗಿ ನೆಲೆಸಿರುವ/ವಾಸಿಸುತ್ತಿರುವ ಹಾಗೂ ಅವರಿಗೆ ಅಕ್ರಮವಾಗಿ ರೇಷನ್‌ಕಾರ್ಡ್, ಆಧಾರಕಾರ್ಡ್ ಹಾಗೂ ಮತದಾರರ ಪಟ್ಟಿಯಲ್ಲಿ ಹೆಸರು ಸೇರ್ಪಡೆಯಾಗುತ್ತಿರುವ ವಿಚಾರ ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಇ) ಹಾಗಿದ್ದಲ್ಲಿ, ಮಹಾನಗರಗಳಲ್ಲಿ ನೆಲೆಸಿರುವ ಬಾಂಗ್ಲಾ ವಲಸಿಗರ ಸಂಖ್ಯೆ ಎಷ್ಟು ; ಅಂತಹವರನ್ನು ಗುರುತಿಸಲಾಗಿದೆಯೇ ; ಅಕ್ರಮ ವಲಸಿಗರನ್ನು ಗಡಿಪಾರು ಮಾಡಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು ; (ವಿವರ ನೀಡುವುದು)

(ಈ) ಅಕ್ರಮ ವಿದೇಶಿಯರಿಗೆ ಸರ್ಕಾರದ ಸೌಲಭ್ಯಗಳನ್ನು (ರೇಷನ್ ಕಾರ್ಡ್, ಮತದಾರರ ಪಟ್ಟಿಯಲ್ಲಿ ಹೆಸರು ಸೇರ್ಪಡೆ) ಒದಗಿಸಲು ನೆರವಾದವರ ಮೇಲೆ ಸರ್ಕಾರ ಏನು ಕ್ರಮಕೈಗೊಂಡಿದೆ ; ಇದರ ಪರಿಶೀಲನೆ ಯಾವ ಹಂತದಲ್ಲಿದೆ; (ವಿವರ ಒದಗಿಸುವುದು)

(ಉ) ವಿದೇಶಿಯರು ನಗರದಲ್ಲಿ ಕಾನೂನು ಬಾಹಿರ ಅಕ್ರಮ ಚಟುವಟಿಕೆಗಳಲ್ಲಿ ಭಾಗಿಯಾಗಿರುವ ಎಷ್ಟು ಜನರ ವಿರುದ್ಧ ಸರ್ಕಾರ ಏನು ಕ್ರಮಗಳನ್ನು ತೆಗೆದುಕೊಂಡಿದೆ ; ಅವಧಿ ಮೀರಿ ರಾಜ್ಯದಲ್ಲಿ ನೆಲೆಸಿರುವ ಇವರನ್ನು ಹೊರ ಹಾಕಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು ? (ವಿವರ ನೀಡುವುದು)